





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللّٰهِ الرَّحْمٰنِ الرَّحِيْمِ

1. ಸೂರ್ಯನ ಹಾಗೂ ಅದರ ಬಿಸಿಲಿನಾಣೆ, — وَالشَّمْسِ وَضُحٰىهَا ①

2. ಚಂದ್ರನಾಣೆ- ಅದು ಅದನ್ನು ಹಿಂಬಾಲಿಸಿದಾಗ, — وَالْقَمَرِ اِذَا تَلٰىهَا ②

3. ಹಗಲಿನಾಣೆ- ಅದು ಸೂರ್ಯನನ್ನು ಪ್ರಕಟಗೊಳಿಸಿದಾಗ, — وَالنَّهَارِ اِذَا جَلّٰىهَا ③

4. ರಾತ್ರಿಯಾಣೆ- ಅದು ಸೂರ್ಯನನ್ನು ಕವಿದಾಗ, — وَالَّيْلِ اِذَا يَغْشٰىهَا ④

5. ಆಕಾಶದ ಹಾಗೂ ಅದನ್ನು ಸ್ಥಾಪಿಸಿದವನಾಣೆ, — وَالسَّمَآءِ وَمَا بَنٰىهَا ⑤

6. ಭೂಮಿಯ ಹಾಗೂ ಅದನ್ನು ಹಾಸಿದವನಾಣೆ, — وَالْاَرْضِ وَمَا طَحٰىهَا ⑥

7. ಮಾನವ ಚಿತ್ತದ ಹಾಗೂ ಅದನ್ನು ಸುಗಮಗೊಳಿಸಿದವನಾಣೆ,[1] — وَنَفْسٍ وَّمَا سَوّٰىهَا ⑦

8. ಆ ಬಳಿಕ ಅವನು ಅದರ ದುಷ್ಕೃತೆಯನ್ನೂ ಅದರ ಸಾತ್ವಿಕತೆಯನ್ನೂ ಅದಕ್ಕೆ ಪ್ರೇರೇಪಿಸಿದನು.[2] — فَاَلْهَمَهَا فُجُوْرَهَا وَتَقْوٰىهَا ⑧

9. ಖಂಡಿತವಾಗಿಯೂ ತನ್ನ ಆತ್ಮವನ್ನು ಸಂಸ್ಕರಿಸಿ ಕೊಂಡವನು ವಿಜಯಿಯಾದನು- — قَدْ اَفْلَحَ مَنْ زَكّٰىهَا ⑨

---

1. ಅರ್ಥಾತ್- ಮಾನವನು ಮಾಡುವ ಕೆಲಸಗಳಿಗೆ ಅವನನ್ನು ಸಮರ್ಥನನ್ನಾಗಿ ಮಾಡುವ ದೇಹ, ಮೆದುಳು, ಇಂದ್ರಿಯಗಳು ಮತ್ತು ಶಕ್ತಿ ಸಾಮರ್ಥ್ಯಗಳನ್ನು ನಾವು ದಯಪಾಲಿಸಿದೆವು.
2. ಇದಕ್ಕೆ ಎರಡು ಅರ್ಥಗಳಿವೆ. ಮೊದಲನೆಯದಾಗಿ ಸೃಷ್ಟಿಕರ್ತನು ಅವನಲ್ಲಿ ಒಳಿತು ಮತ್ತು ಕೆಡುಕುಗಳೆರಡರ ಕಡೆಗೂ ಸೆಳೆತ ಮತ್ತು ಬಲವನ್ನಿಟ್ಟಿದ್ದಾನೆ. ಎರಡನೆಯದಾಗಿ ಪ್ರತಿಯೊಬ್ಬ ಮಾನವನ ಸುಪ್ತ ಮನಸ್ಸಿನಲ್ಲಿ ಅಲ್ಲಾಹನು ನಡವಳಿಕೆಯಲ್ಲಿ ಕೆಲವು ಉತ್ತಮವಾದುದು ಮತ್ತು ಕೆಲವು ಕೆಟ್ಟದ್ದಾಗಿವೆ ಎಂಬ ಕಲ್ಪನೆಯನ್ನು ಲೀನಗೊಳಿಸಿದ್ದಾನೆ. ಒಳ್ಳೆಯ ನೀತಿ-ನಡವಳಿಕೆ ಮತ್ತು ಕೆಟ್ಟ ನೀತಿ ನಡವಳಿಕೆ ಸರಿಸಮಾನವಲ್ಲ. ಫುಜೂರ್ (ದುಷ್ಟ ಕೆಲಸಗಳು) ಅತ್ಯಂತ ತುಚ್ಛವಾದುದಾಗಿವೆ. ತಕ್ವಾ(ಕೆಡುಕಿನಿಂದ ದೂರ ಉಳಿಯುವುದು) ಅತ್ಯಂತ ಉದಾತ್ತ ಗುಣವಾಗಿದೆ- ಎಂಬಿತ್ಯಾದಿಗಳು ಮಾನವನ ಮಟ್ಟಿಗೆ ಅಪರಿಚಿತ ಕಲ್ಪನೆಯಲ್ಲ. ಮಾನವ ಪ್ರಕೃತಿಯೇ ಅದನ್ನರಿತಿದೆ. ಒಳಿತು-ಕೆಡುಕುಗಳ ನಡುವೆ ಭೇದ ಕಲ್ಪಿಸುವ ಆಜನ್ಮ ಗುಣವನ್ನು ಸೃಷ್ಟಿಕರ್ತನು ಅವನಿಗೆ ದಯಪಾಲಿಸಿದ್ದಾನೆ.

10. ಮತ್ತು ಅದನ್ನು ದಮನಿಸಿದವನು ಸೋಲುಂಡನು.[3]

وَقَدْ خَابَ مَن دَسَّىٰهَا ١٠

11. ಸಮೂದರು ತಮ್ಮ ವಿದ್ರೋಹದಿಂದಾಗಿ ಸುಳ್ಳಾಗಿಸಿದರು.

كَذَّبَتْ ثَمُودُ بِطَغْوَىٰهَآ ١١

12. ಆ ಜನಾಂಗದ ಅತ್ಯಂತ ದುಷ್ಟ ವ್ಯಕ್ತಿಯು ಕೆರಳಿ ಎದ್ದಾಗ-

إِذِ ٱنۢبَعَثَ أَشْقَىٰهَا ١٢

13. ಅಲ್ಲಾಹನ ಸಂದೇಶವಾಹಕರು ಆ ಜನರೊಡನೆ, "ಜಾಗ್ರತೆ! ಅಲ್ಲಾಹನ ಒಂಟೆಯನ್ನು (ಮುಟ್ಟಬೇಡಿರಿ) ಮತ್ತು ಅದು ನೀರು ಕುಡಿಯುವುದನ್ನು (ತಡೆಯಬೇಡಿರಿ)" ಎಂದರು.

فَقَالَ لَهُمْ رَسُولُ ٱللَّهِ نَاقَةَ ٱللَّهِ وَسُقْيَٰهَا ١٣

14. ಆದರೆ ಅವರು ಅವರ ಮಾತನ್ನು ಸುಳ್ಳೆಂದು ಸಾರಿದರು ಮತ್ತು ಒಂಟೆಯನ್ನು ಕೊಂದುಬಿಟ್ಟರು. ಕೊನೆಗೆ ಅವರ ಪಾಪದ ಫಲವಾಗಿ ಅವರ ಪ್ರಭು ಅವರ ಮೇಲೆ, ಏಕಕಾಲದಲ್ಲಿ ಎಲ್ಲರನ್ನೂ ಮಣ್ಣುಗೂಡಿಸುವಂತಹ ವಿಪತ್ತನ್ನು ಎರಗಿಸಿದನು-[4]

فَكَذَّبُوهُ فَعَقَرُوهَا فَدَمْدَمَ عَلَيْهِمْ رَبُّهُم بِذَنۢبِهِمْ فَسَوَّىٰهَا ١٤

15. ಮತ್ತು ಅವನಿಗೆ (ತನ್ನ ಈ ಕೃತ್ಯದ) ಯಾವುದೇ ದುಷ್ಪರಿಣಾಮದ ಭಯವಿಲ್ಲ.

وَلَا يَخَافُ عُقْبَٰهَا ١٥

---

3. ಆತ್ಮವನ್ನು ಸಂಸ್ಕರಿಸಿಕೊಳ್ಳುವುದೆಂದರೆ ಅದನ್ನು ಕೆಡುಕುಗಳಿಂದ ಮುಕ್ತಗೊಳಿಸುವುದು. ಅದರಲ್ಲಿ ಒಳಿತುಗಳನ್ನು ಬೆಳೆಸುವುದು, ಅದನ್ನು ದಮನಿಸುವುದು ಎಂದರೆ ಮಾನವ ತನ್ನ ಮನಸ್ಸಿನ ದುಷ್ಪ್ರೇರಣೆಗಳನ್ನು ಬೆಳೆಸಿ ಸತ್ಪ್ರೇರಣೆಗಳನ್ನು ದಮನಿಸಿ ಬಿಡುವುದು.
4. ಆ ದುಷ್ಟ ವ್ಯಕ್ತಿ ತನ್ನ ಜನಾಂಗದ ಇಚ್ಛೆಯಂತೆ ಮಾತ್ರವಲ್ಲ ಅವರ ಅಪೇಕ್ಷೆಯಂತೆ ಒಂಟೆಯನ್ನು ಕೊಂದಿದ್ದನು. ಸೂರಃ ಅಲ್ ಕಮರ್‌ನ 29ನೆಯ ಸೂಕ್ತದಲ್ಲೂ ಇದನ್ನು ವಿವರಿಸಲಾಗಿದೆ. ಆದ್ದರಿಂದ ಸಮಸ್ತ ಜನಾಂಗದ ಮೇಲೆ ಯಾತನೆಯನ್ನೆರಗಿಸಲಾಯಿತು.